# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: | 314 |
| ಸದಸ್ಯರ ಹೆಸರು | ಶ್ರೀ ಘೋಟ್ನೇಕರ ಶ್ರೀಕಾಂತ ಲಕ್ಷ್ಮಣ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | 06.03.2020. |
| ಉತ್ತರಿಸುವ ಸಚಿವರು | ಮಾನ್ಯ ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು ಸಂಸ್ಕೃತಿ ಹಾಗೂ ಯುವ ಸಬಲೀಕರಣ ಮತ್ತು ಕ್ರೀಡಾ ಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಕಾರವಾರ ಜಿಲ್ಲೆಯ ಜೋಯಿಡಾ ತಾಲ್ಲೂಕಿನಲ್ಲಿರುವ ಏಕೈಕ ಕನ್ನಡ ಭವನವು ಅಧಿಕಾರಿಗಳ, ನಿರ್ಲಕ್ಷತನದಿಂದ ಪಾಳು ಬಿದ್ದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; (ವಿವರ ನೀಡುವುದು) | ಜೋಯಿಡಾ ತಾಲ್ಲೂಕಿನಲ್ಲಿರುವ ಕನ್ನಡ ಭವನವು ಸುಸ್ಥಿತಿಯಲ್ಲಿದ್ದು, ಈ ಕಟ್ಟಡದ ಭಾಗಶಃ ಭಾಗವನ್ನು ಗ್ರಂಥಾಲಯಕ್ಕಾಗಿ ಹಾಗೂ ಮುಖ್ಯ ಭಾಗವನ್ನು ಸಭೆ ಸಮಾರಂಭಗಳಿಗೆ ಉಪಯೋಗಿಸುತ್ತಿದ್ದು, ಭವನವು ಹಾಳು ಬಿದ್ದಿರುವುದಿಲ್ಲ. |
| ಆ) | ಜೋಯಿಡಾದಲ್ಲಿರುವ ಕನ್ನಡ ಭವನದಲ್ಲಿ ಯಾವುದೇ ಮೂಲಭೂತ ಸೌಕರ್ಯ ಇಲ್ಲದೇ ಇರುವುದರಿಂದ ಸರ್ಕಾರಿ ಸಭೆ ನಡೆಸಲು ಸಮಸ್ಯೆ ಆಗಿದ್ದು, ಹಾಗೂ ಸದರಿ ಭವನದಲ್ಲಿ ಸ್ವಚ್ಛತೆಯ ಕೊರತೆ ಇರುವುದರ ಪ್ರಯುಕ್ತ ಯಾವುದೇ ಕಾರ್ಯಕ್ರಮ ನಡೆಸಲಾರದೇ ಭವನ ಹಾಳಾಗಿದ್ದು ಈ ಬಗ್ಗೆ ಸಂಬಂಧಿಸಿದ ಅಧಿಕಾರಿಗಳು ಇಲ್ಲಿಯವರೆಗೆ ಮಾಡಿರುವ ನಿಷ್ಕಾಳಜಿ ತನಕ್ಕೆ ಸೂಕ್ತ ಕ್ರಮ ಕೈಗೊಳ್ಳಲಾಗುವುದೇ; ಮುಂದಿನ ದಿನಗಳಲ್ಲಿ ಸದರಿ ಭವನ ಎಲ್ಲಾ ಸೌಕರ್ಯಗಳಿಂದ ಅನುಕೂಲವಾಗುವ ರೀತಿಯಲ್ಲಿ ಸಿಗುವಂತೆ ಸರ್ಕಾರ ಕ್ರಮ ಕೈಗೊಳ್ಳುವುದೇ? (ವಿವರ ನೀಡುವುದು) | ಪ್ರಸ್ತುತ ಕನ್ನಡ ಭವನದಲ್ಲಿ ಮೂಲಭೂತ ಸೌಕರ್ಯಗಳಾದ ವಿದ್ಯುತ್, ಶೌಚಾಲಯ ಹಾಗೂ ಕಟ್ಟಡವು ಸುವ್ಯವಸ್ಥಿತವಾಗಿದ್ದು, ಕಟ್ಟಡ ನಿರ್ಮಿಸಿ ಬಹಳ ವರ್ಷಗಳಾಗಿದ್ದ ಪ್ರಯುಕ್ತ ಕೆಲವೊಂದು ಸಣ್ಣಪುಟ್ಟ ದುರಸ್ತಿ ಅಂದರೆ ಕಿಟಕಿ ಬಾಗಿಲು ದುರಸ್ಥಿ ಹಾಗೂ ಸುಣ್ಣ ಬಣ್ಣ ಕಾಮಗಾರಿ ನಿರ್ವಹಿಸಬೇಕಾಗಿರುತ್ತದೆ. ಪ್ರಸ್ತುತ ಸಾಲಿನ ಪ್ರಕೃತಿ ವಿಕೋಪ ಯೋಜನೆಯಡಿ ರೂ.1.50 ಲಕ್ಷ ಅನುದಾನದಲ್ಲಿ ಈ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗುತ್ತಿದೆ. ಬಾಕಿ ಉಳಿದ ಕೆಲಸಗಳನ್ನು ಅನುದಾನದ ಲಭ್ಯತೆಯನುಸಾರ ಕೈಗೊಳ್ಳುವ ಬಗ್ಗೆ ಪರಿಶೀಲಿಸಲಾಗುವುದು. |

ಸಂಖ್ಯೆ: ಕಸಂವಾ 13 ಕವಿಸ ಆಕ 2020.

(ಸಿ.ಟಿ. ರವಿ)
ಪ್ರವಾಸೋದ್ಯಮ ಮತ್ತು ಕನ್ನಡ ಮತ್ತು
ಸಂಸ್ಕೃತಿ ಹಾಗೂ ಯುವ ಸಬಲೀಕರಣ
ಮತ್ತು ಕ್ರೀಡಾ ಸಚಿವರು.